# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 58

ಸದಸ್ಯರ ಹೆಸರು : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ

ಉತ್ತರಿಸಬೇಕಾದ ದಿನಾಂಕ : 09-07-2018

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿ ಎಷ್ಟು ಪ್ರಾಥಮಿಕ ಆರೋಗ್ಯ ಕೇಂದ್ರಗಳು ಇವೆ; ಇಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯರ ಸಂಖ್ಯೆ ಎಷ್ಟು; ವೈದ್ಯರು ರೋಗಿಗಳಿಗೆ ಚಿಕಿತ್ಸೆ ನೀಡಲು ಎಲ್ಲಾ ಸಮಯದಲ್ಲಿ ಲಭ್ಯವಿರುವ ಬಗ್ಗೆ ಮಾಹಿತಿ ನೀಡುವುದು | ಬೀದರ್ ಜಿಲ್ಲೆಯಲ್ಲಿ ಒಟ್ಟು 55 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ.<br>ಇಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯರುಗಳ ಸಂಖ್ಯೆ: 53. ಸಾರ್ವಜನಿಕರಿಗೆ ತೊಂದರೆಯಾಗದಂತೆ ಎಲ್ಲಾ ಸಮಯದಲ್ಲಿಯೂ ಸಹ ಚಿಕಿತ್ಸೆ ನೀಡಲಾಗುತ್ತಿದೆ. ವೈದ್ಯರು ಇಲ್ಲದ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ವಾರದಲ್ಲಿ ಮೂರು ದಿನ ನಿಯೋಜನೆ ಮೇಲೆ ವೈದ್ಯರುಗಳನ್ನು ನೇಮಿಸಲಾಗುತ್ತಿದೆ. |
| ಆ | ಈ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಸರ್ಕಾರವು ಕಳೆದ 5 ವರ್ಷಗಳಲ್ಲಿ ನೀಡಿರುವ ಅನುದಾನ ಎಷ್ಟು; ನೀಡಿರುವ ಅನುದಾನವನ್ನು ಸಮರ್ಪಕವಾಗಿ ಬಳಕೆ ಮಾಡಿಕೊಳ್ಳಲಾಗಿದೆಯೇ; ಮಾಡಿಕೊಂಡಿದ್ದಲ್ಲಿ (ಸ್ಪಷ್ಟ ಮಾಹಿತಿ ನೀಡುವುದು) | ಕಳೆದ 5 ವರ್ಷಗಳಲ್ಲಿ ಕುಟುಂಬ ಕಲ್ಯಾಣ ನಿಧಿ ಅಡಿ ರೂ.5727.48 ಲಕ್ಷ ಅನುದಾನ ಒದಗಿಸಿದ್ದು, ಇದರಲ್ಲಿ ರೂ.4421.59 ಲಕ್ಷ ಖರ್ಚಾಗಿರುತ್ತದೆ. ವೈದ್ಯಕೀಯ ಮತ್ತು ಜನಾರೋಗ್ಯ ನಿಧಿ ಅಡಿ ರೂ.15176.00 ಲಕ್ಷಗಳ ಅನುದಾನ ಒದಗಿಸಿದ್ದು, ಇದರಲ್ಲಿ ರೂ.12694.59 ಲಕ್ಷ ಖರ್ಚಾಗಿರುತ್ತದೆ. ವಿವರ ಕೆಳಕಂಡಂತೆ ಇದೆ: |

| ಕ್ರಸಂ | ವರ್ಷ | ಬಿಡುಗಡೆ ಯಾದ ಅನುದಾನ ರೂ. ಲಕ್ಷಗಳಲ್ಲಿ | ಖರ್ಚಾದ ಅನುದಾನ ರೂ. ಲಕ್ಷಗಳಲ್ಲಿ | ಶೇಕಡಾ ವಾರು ವೆಚ್ಚ |
|---|---|---|---|---|
| ಕುಟುಂಬ ಕಲ್ಯಾಣ ನಿಧಿ | | | | |
| 1 | 2014-15 | 1277.12 | 1127.21 | 88.26 |
| 2 | 2015-16 | 1296.00 | 1034.58 | 79.82 |
| 3 | 2016-17 | 1170.00 | 917.16 | 78.38 |
| 4 | 2017-18 | 1661.27 | 1341.62 | 80.75 |
| 5 | 2018-19 | 323.09 | 1.02 | 0.82 |
| ವೈದ್ಯಕೀಯ ಮತ್ತು ಜನಾರೋಗ್ಯ ನಿಧಿ | | | | |
| 1 | 2014-15 | 3235.54 | 2685.64 | 83.00 |
| 2 | 2015-16 | 3368.03 | 2940.26 | 87.29 |
| 3 | 2016-17 | 3489.31 | 3156.38 | 90.45 |
| 4 | 2017-18 | 3843.36 | 3446.93 | 89.68 |
| 5 | 2018-19 | 1239.76 | 465.38 | 37.53 |

| | | |
|---|---|---|
| ಇ | ಈ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಉನ್ನತೀಕರಿಸಲು ಸರ್ಕಾರ ಯಾವ ಯೋಜನೆಗಳನ್ನು ಹಾಕಿಕೊಂಡಿದೆ: ಮತ್ತು ಅದಕ್ಕೆ ನಿಗದಿಪಡಿಸಿದ ಅನುದಾನ ಎಷ್ಟು: ಇದಕ್ಕೆ ರಾಜ್ಯ ಮತ್ತು ಕೇಂದ್ರದ ಪಾಲೆಷ್ಟು?(ಪ್ರಾಥಮಿಕ ಆರೋಗ್ಯ ಕೇಂದ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಬೀದರ್ ಜಿಲ್ಲೆಯ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿ ಉನ್ನತೀಕರಿಸುವ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದೆ ಇರುವುದಿಲ್ಲ. |

ಆಕುಕ 39 ಎಸ್‌ಎಂಎಂ 2018

(ಶಿವಾನಂದ ಎಸ್ ಪಾಟೀಲ)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು